# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>**Volume 150** | ಬೆಂಗಳೂರು, ಗುರುವಾರ, ಆಗಸ್ಟ್ ೨೦, ೨೦೧೫ (ಶ್ರಾವಣ ೨೯, ಶಕ ವರ್ಷ ೧೯೩೭)<br>**Bangalore, Thursday, August 20, 2015 (Shravana 29, Shaka Varsha 1937)** | ಸಂಚಿಕೆ ೩೪<br>**Issue 34** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ಸೇರ್ಪಡೆ ಆದೇಶ**

**ಸಂಖ್ಯೆ: ಕಂಇ 201 ಮುಅಬಿ 2014 ಬೆಂಗಳೂರು, ದಿನಾಂಕ: 06–03–2015**

ಸರ್ಕಾರದ ಆದೇಶ ಸಂಖ್ಯೆ:ಕಂಇ 01 ಮುಅಬಿ 2006, ದಿನಾಂಕ: 03–06–2006ರ ಅನುಬಂಧದ ಮಾರ್ಗಸೂಚಿಯಲ್ಲಿನ ಕ್ರಮ ಸಂಖ್ಯೆ(08)ರ ನಂತರ, ಕ್ರಮ ಸಂಖ್ಯೆ(09)ರಲ್ಲಿ **"ಯಾತ್ರಾರ್ಥಿಗಳು ಕೈಲಾಸ ಮಾನಸ ಸರೋವರ ಯಾತ್ರೆಯನ್ನು ಪೂರ್ಣಗೊಳಿಸಿದ ಬಳಿಕ ಯಾತ್ರೆಗೆ ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು ನಿಗಧಿತ ಕಾಲದಲ್ಲಿ ಒದಗಿಸಿದ ನಂತರ ಅರ್ಜಿಗಳನ್ನು ಪರಿಶೀಲಿಸಿ ಎಲ್ಲಾ ಅರ್ಹ ಅರ್ಜಿದಾರರ ಹೆಸರುಗಳನ್ನು ಸೇರಿಸಿ ಲಾಟರಿ ಮುಖಾಂತರ ಅನುದಾನಕ್ಕೆ ಅನುಗುಣವಾಗಿ ಫಲಾನುಭವಿಗಳನ್ನು ಆಯ್ಕೆ ಮಾಡಿ ಸಹಾಯಧನ ಮಂಜೂರು ಮಾಡಲು ಕ್ರಮ ಕೈಗೊಳ್ಳಲಾಗುವುದು. ಸದರಿ ಲಾಟರಿಯನ್ನು ರಾಜ್ಯ ಧಾರ್ಮಿಕ ಪರಿಷತ್ತಿನ ನ್ಯಾಯಿಕ ಸದಸ್ಯರು ಹಾಗೂ ಪ್ರವರ್ಗ 'ಎ' ಮತ್ತು 'ಬಿ' ದೇವಾಲಯಗಳ ಮೂರು ಜನ ಕಾರ್ಯನಿರ್ವಾಹಕ ಅಧಿಕಾರಿಗಳ ಸಮಿತಿಯ ಸಮಕ್ಷಮದಲ್ಲಿ ನಡೆಸಲಾಗುವುದು"** ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೃಷ್ಣಾಜಿ ಡಿ. ಕೆರೂರ**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**PR-234**

**SC-25**

### ತೋಟಗಾರಿಕೆ ಮತ್ತು ರೇಷ್ಮೆ ಸಚಿವಾಲಯ

**ವಿಷಯ :** ರೇಷ್ಮೆ ಇಲಾಖೆಯ ರೇಷ್ಮೆ ನಿರ್ದೇಶನಾಲಯದಲ್ಲಿ ಅಗತ್ಯವಿರುವ ಸಂಗ್ರಹಣೆಗಳಿಗೆ ಇ–ಟೆಂಡರ್ ಕರೆಯಲು ವಿವಿಧ ಪ್ರಾಧಿಕಾರಗಳನ್ನು ರಚಿಸುವ ಕುರಿತು.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ: ತೋಇ 12 ರೇಕೃವಿ 2015, ದಿನಾಂಕ: 12–02–2015

2) ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ: ರೇನಿ/ಇಸಂಗ್ರಹ/ಟೆಂಡರ್‌ಸಮಿತಿ/15/2014–15, ದಿನಾಂಕ: 27–02–2015/03–03–2015

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 12–02–2015ರ ಆದೇಶದಲ್ಲಿ ರೇಷ್ಮೆ ಇಲಾಖೆಯ ವಿವಿಧ ಯೋಜನೆಗಳಡಿ ಸಿವಿಲ್ ಕಾಮಗಾರಿಗಳ ಟೆಂಡರ್ ಪರಿಶೀಲನಾ ಮತ್ತು ಟೆಂಡರ್ ಮೌಲ್ಯಮಾಪನ ಸಮಿತಿ ಹಾಗೂ ಟೆಂಡರ್ ಅಂಗೀಕಾರ ಪ್ರಾಧಿಕಾರವನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳು 2000ರ ನಿಯಮ 20, 21 & 17ರನ್ವಯ ರಚಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 27–02–2015/03–03–2015ರ ಪತ್ರದಲ್ಲಿ ರೇಷ್ಮೆ ನಿರ್ದೇಶನಾಲಯದಲ್ಲಿ ಅಗತ್ಯವಿರುವ ಸಂಗ್ರಹಣೆಗಳಿಗೆ ಸಂಬಂಧಿಸಿದಂತೆ 2011–12ನೇ ಸಾಲಿನಿಂದ ಇ–ಟೆಂಡರ್ ಪದ್ಧತಿಯನ್ನು ಜಾರಿಗೊಳಿಸಿದೆ. ಟೆಂಡರ್ ಪ್ರಕ್ರಿಯೆಯನ್ನು ನಿಯಮಾನುಸಾರ ಪರಿಶೀಲಿಸಿ ಅಂತಿಮಗೊಳಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ 2000ರ ಕಾಯ್ದೆ 29 ಅಧ್ಯಾಯ 2ರ ಕ್ರಮ ಸಂಖ್ಯೆ 9

ಮತ್ತು 10ರ ರೀತ್ಯಾ ಟೆಂಡರ್ ಮೌಲ್ಯಮಾಪನ ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರಗಳನ್ನು ದಿನಾಂಕ: 14-05-2013 ಮತ್ತು 28-04-2014ರ ಆದೇಶಗಳಲ್ಲಿ ಇಲಾಖಾ ಹಂತದಲ್ಲಿ ಈ ಕೆಳಕಂಡಂತೆ ರಚಿಸಲಾಗಿದೆ.

**ಟೆಂಡರ್ ಪರಿಶೀಲನಾ ಹಾಗೂ ಮೌಲ್ಯಮಾಪನ ಪ್ರಾಧಿಕಾರ**

| | |
|---|---|
| ಅಧ್ಯಕ್ಷರು | ರೇಷ್ಮೆ ಹೆಚ್ಚುವರಿ ನಿರ್ದೇಶಕರು / ರೇಷ್ಮೆ ಜಂಟಿ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಮುಖ್ಯ ಲೆಕ್ಕಾಧಿಕಾರಿಗಳು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಟೆಂಡರ್‌ಗೆ ಸಂಬಂಧಿಸಿದ ಶಾಖೆಯ ರೇಷ್ಮೆ ಉಪ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯ ಸಮಾವೇಶಕರು | ರೇಷ್ಮೆ ಉಪ ನಿರ್ದೇಶಕರು, ಗೂಡಿನ ಮಾರುಕಟ್ಟೆ ಮತ್ತು ಇ-ಪ್ರಕ್ಯೂರ್‌ಮೆಂಟ್ |
| **ಟೆಂಡರ್ ಅಂಗೀಕರಿಸುವ ಪ್ರಾಧಿಕಾರ** | |
| ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು | |

ಪ್ರಸ್ತುತ ಸಿವಿಲ್ ಕಾಮಗಾರಿಗಳನ್ನು ಹೊರತುಪಡಿಸಿ ಇತರ ಸಂಗ್ರಹಣೆಗಳ ಕುರಿತು ವಿವಿಧ ಪ್ರಾಧಿಕಾರಗಳನ್ನು ರಚಿಸಿ ಸರ್ಕಾರದ ಆದೇಶ ಹೊರಡಿಸುವ ಅಗತ್ಯತೆ ಇರುತ್ತದೆಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಪ್ರಸ್ತಾಪಿಸಿ ಈ ಕೆಳಕಂಡಂತೆ ವಿವರಿಸಿರುತ್ತಾರೆ :

**ರೂ.1.00 ಕೋಟಿವರೆಗಿನ ಮೌಲ್ಯದ ಸಂಗ್ರಹಣೆಗಾಗಿ ಟೆಂಡರ್ ಪರಿಶೀಲನಾ ಹಾಗೂ ಮೌಲ್ಯಮಾಪನ ಸಮಿತಿ**

| | |
|---|---|
| ಅಧ್ಯಕ್ಷರು | ರೇಷ್ಮೆ ಹೆಚ್ಚುವರಿ ನಿರ್ದೇಶಕರು / ರೇಷ್ಮೆ ಜಂಟಿ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಮುಖ್ಯ ಲೆಕ್ಕಾಧಿಕಾರಿಗಳು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಟೆಂಡರ್‌ಗೆ ಸಂಬಂಧಿಸಿದ ಶಾಖೆಯ ರೇಷ್ಮೆ ಉಪ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯ ಸಮಾವೇಶಕರು | ರೇಷ್ಮೆ ಉಪ ನಿರ್ದೇಶಕರು, ಗೂಡಿನ ಮಾರುಕಟ್ಟೆ ಮತ್ತು ಇ-ಪ್ರಕ್ಯೂರ್‌ಮೆಂಟ್ |
| **ರೂ.1.00 ಕೋಟಿವರೆಗಿನ ಮೌಲ್ಯದ ಸಂಗ್ರಹಣೆಗಾಗಿ ಟೆಂಡರ್ ಅಂಗೀಕರಿಸುವ ಪ್ರಾಧಿಕಾರ** | |
| ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು | |

**(ರೂ.1.00 ಕೋಟಿಗಿಂತ ಮೇಲ್ಪಟ್ಟ ಮೌಲ್ಯದ ಸಂಗ್ರಹಣೆಗಾಗಿ ಟೆಂಡರ್ ಪರಿಶೀಲನಾ ಹಾಗೂ ಮೌಲ್ಯಮಾಪನ ಸಮಿತಿ)**

| | |
|---|---|
| ಅಧ್ಯಕ್ಷರು | ರೇಷ್ಮೆ ಹೆಚ್ಚುವರಿ ನಿರ್ದೇಶಕರು / ರೇಷ್ಮೆ ಜಂಟಿ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಮುಖ್ಯ ಲೆಕ್ಕಾಧಿಕಾರಿಗಳು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಟೆಂಡರ್‌ಗೆ ಸಂಬಂಧಿಸಿದ ಶಾಖೆಯ ರೇಷ್ಮೆ ಉಪ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯ ಸಮಾವೇಶಕರು | ರೇಷ್ಮೆ ಉಪ ನಿರ್ದೇಶಕರು, ಗೂಡಿನ ಮಾರುಕಟ್ಟೆ ಮತ್ತು ಇ-ಪ್ರಕ್ಯೂರ್‌ಮೆಂಟ್ |
| ರೂ.1.00 ಕೋಟಿಗಿಂತ ಮೇಲ್ಪಟ್ಟ ಮೌಲ್ಯದ ಸಂಗ್ರಹಣೆಗಾಗಿ ಟೆಂಡರ್ ಅಂಗೀಕರಿಸುವ ಪ್ರಾಧಿಕಾರ | |
| ಅಧ್ಯಕ್ಷರು | ಸರ್ಕಾರದ ಪ್ರಧಾನ ಕಾರ್ಯದರ್ಶಿ, ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ. |
| ಸದಸ್ಯರು | ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ನಿರ್ದೇಶಕರು, ಕೆ.ಎಸ್.ಎಸ್.ಆರ್.ಡಿ.ಐ., ತಲಘಟ್ಟಪುರ |
| ಸದಸ್ಯ ಸಮಾವೇಶಕರು | ರೇಷ್ಮೆ ಹೆಚ್ಚುವರಿ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |

**ಟಿಪ್ಪಣಿ: ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಅಗತ್ಯ ಬಿದ್ದಲ್ಲಿ ಕಡಿಮೆ ದರ ನಮೂದಿಸಿರುವ ಸಂಸ್ಥೆಯ ಜೊತೆ Negotiate ಮಾಡಲು ಸಕ್ಷಮ ಪ್ರಾಧಿಕಾರವಾಗಿರುತ್ತದೆ.**

ಮೇಲೆ ಪ್ರಸ್ತಾಪಿಸಿರುವ ವಿವಿಧ ಪ್ರಾಧಿಕಾರಗಳನ್ನು ರಚಿಸಿದಲ್ಲಿ ನಿಗಧಿತ ಅವಧಿಯಲ್ಲಿ ಟೆಂಡರ್ ಪ್ರಕ್ರಿಯೆಯನ್ನು ಕೈಗೊಂಡು ಮುಕ್ತಾಯಗೊಳಿಸಲು ಸಹಕಾರಿಯಾಗುತ್ತದೆ. ಆದುದರಿಂದ ಮೇಲೆ ಪ್ರಸ್ತಾಪಿಸಿರುವಂತೆ ವಿವಿಧ ಪ್ರಾಧಿಕಾರಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ 2000ರ ಕಾಯ್ದೆ 29 ಅಧ್ಯಾಯ 2ರ ಕ್ರಮ ಸಂಖ್ಯೆ 9 ಮತ್ತು 10ರ ರೀತ್ಯಾ ರಚಿಸಿ ಸರ್ಕಾರದ ಆದೇಶ ಹೊರಡಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ನಿರ್ದೇಶನಾಲಯದಲ್ಲಿ ಅಗತ್ಯವಿರುವ ಸಂಗ್ರಹಣೆಗಳಿಗೆ ಸಂಬಂಧಿಸಿದಂತೆ ಟೆಂಡರ್ ಪ್ರಕ್ರಿಯೆಯನ್ನು ನಿಯಮಾನುಸಾರ ಅಂತಿಮಗೊಳಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ ಸೆಕ್ಷನ್ 9 ಮತ್ತು 10ರನ್ವಯ ಈ ಕೆಳಕಂಡ ಟೆಂಡರ್ ಪರಿಶೀಲನಾ ಹಾಗೂ ಮೌಲ್ಯ ಮಾಪನ ಸಮಿತಿ ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರವನ್ನು ರಚಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ತೋಇ 12 ರೇಕೃವಿ 2015 ಬೆಂಗಳೂರು, ದಿನಾಂಕ: 06–04–2015.**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಹಾಗೂ ರೇಷ್ಮೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ನಿರ್ದೇಶನಾಲಯದಲ್ಲಿ ಅಗತ್ಯವಿರುವ ಸಂಗ್ರಹಣೆಗಳಿಗೆ ಸಂಬಂಧಿಸಿದಂತೆ ಟೆಂಡರ್ ಪ್ರಕ್ರಿಯೆಯನ್ನು ನಿಯಮಾನುಸಾರ ಅಂತಿಮಗೊಳಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ ಸೆಕ್ಷನ್ 9 ಮತ್ತು 10ರನ್ವಯ ಈ ಕೆಳಕಂಡ ಟೆಂಡರ್ ಪರಿಶೀಲನಾ ಹಾಗೂ ಮೌಲ್ಯ ಮಾಪನ ಸಮಿತಿ ಮತ್ತು ಟೆಂಡರ್ ಅಂಗೀಕರಿಸುವ ಪ್ರಾಧಿಕಾರವನ್ನು ರಚಿಸಿ ಸರ್ಕಾರವು ಆದೇಶಿಸಿದೆ.

**(ರೂ.1.00 ಕೋಟಿವರೆಗಿನ ಮೇಲ್ಪಟ್ಟ ಮೌಲ್ಯದ ಸಂಗ್ರಹಣೆಗಾಗಿ ಟೆಂಡರ್ ಪರಿಶೀಲನಾ ಹಾಗೂ ಮೌಲ್ಯಮಾಪನ ಸಮಿತಿ)**

| | |
|---|---|
| ಅಧ್ಯಕ್ಷರು | ರೇಷ್ಮೆ ಹೆಚ್ಚುವರಿ ನಿರ್ದೇಶಕರು / ರೇಷ್ಮೆ ಜಂಟಿ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಮುಖ್ಯ ಲೆಕ್ಕಾಧಿಕಾರಿಗಳು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಟೆಂಡರ್‌ಗೆ ಸಂಬಂಧಿಸಿದ ಶಾಖೆಯ ರೇಷ್ಮೆ ಉಪ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯ ಸಮಾವೇಶಕರು | ರೇಷ್ಮೆ ಉಪ ನಿರ್ದೇಶಕರು, ಗೂಡಿನ ಮಾರುಕಟ್ಟೆ ಮತ್ತು ಇ–ಪ್ರಕ್ಯೂರ್‌ಮೆಂಟ್ |
| **ರೂ.1.00 ಕೋಟಿವರೆಗಿನ ಮೌಲ್ಯದ ಸಂಗ್ರಹಣೆಗಾಗಿ ಟೆಂಡರ್ ಅಂಗೀಕರಿಸುವ ಪ್ರಾಧಿಕಾರ** | |
| ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು | |

**ರೂ.1.00 ಕೋಟಿಗಿಂತ ಮೇಲ್ಪಟ್ಟ ಮೌಲ್ಯದ ಸಂಗ್ರಹಣೆಗಾಗಿ ಟೆಂಡರ್ ಪರಿಶೀಲನಾ ಹಾಗೂ ಮೌಲ್ಯಮಾಪನ ಸಮಿತಿ**

| | |
|---|---|
| ಅಧ್ಯಕ್ಷರು | ರೇಷ್ಮೆ ಹೆಚ್ಚುವರಿ ನಿರ್ದೇಶಕರು / ರೇಷ್ಮೆ ಜಂಟಿ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಮುಖ್ಯ ಲೆಕ್ಕಾಧಿಕಾರಿಗಳು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ಟೆಂಡರ್‌ಗೆ ಸಂಬಂಧಿಸಿದ ಶಾಖೆಯ ರೇಷ್ಮೆ ಉಪ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯ ಸಮಾವೇಶಕರು | ರೇಷ್ಮೆ ಉಪ ನಿರ್ದೇಶಕರು, ಗೂಡಿನ ಮಾರುಕಟ್ಟೆ ಮತ್ತು ಇ–ಪ್ರಕ್ಯೂರ್‌ಮೆಂಟ್ |
| **ರೂ.1.00 ಕೋಟಿಗಿಂತ ಮೇಲ್ಪಟ್ಟ ಮೌಲ್ಯದ ಸಂಗ್ರಹಣೆಗಾಗಿ ಟೆಂಡರ್ ಅಂಗೀಕರಿಸುವ ಪ್ರಾಧಿಕಾರ** | |
| ಅಧ್ಯಕ್ಷರು | ಸರ್ಕಾರದ ಪ್ರಧಾನ ಕಾರ್ಯದರ್ಶಿ, ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ. |

| | |
|---|---|
| ಸದಸ್ಯರು | ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |
| ಸದಸ್ಯರು | ನಿರ್ದೇಶಕರು, ಕೆ.ಎಸ್.ಎಸ್.ಆರ್.ಡಿ.ಐ., ತಲಘಟ್ಟಪುರ |
| ಸದಸ್ಯ ಸಮಾವೇಶಕರು | ರೇಷ್ಮೆ ಹೆಚ್ಚುವರಿ ನಿರ್ದೇಶಕರು, ರೇಷ್ಮೆ ನಿರ್ದೇಶನಾಲಯ |

ಟಿಪ್ಪಣಿ: ಟೆಂಡರ್ ಅಂಗೀಕರಿಸುವ ಪ್ರಾಧಿಕಾರವು ಅಗತ್ಯ ಬಿದ್ದಲ್ಲಿ ಕಡಿಮೆ ದರ ನಮೂದಿಸಿರುವ ಸಂಸ್ಥೆಯ ಜೊತೆ Negotiate ಮಾಡಲು ಸಕ್ಷಮ ಪ್ರಾಧಿಕಾರವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR-274**

**ಎಂ.ಬಿ.ವಿಜಯಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ (ರೇಷ್ಮೆ)

## ಆರ್ಥಿಕ ಸಚಿವಾಲಯ

**ವಿಷಯ :** ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ 19 ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಆಇ 419 ರಾಲೆಪ 2008, ದಿನಾಂಕ: 05–04–2014.

2. ನಿಯಂತ್ರಕರ ಪತ್ರ ಸಂಖ್ಯೆ:ರಾಲೆಪ 20 ಇಟಿಪಿ 83/2012/15/4079 ದಿ: 26–02–2015.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾಲಯ (ಜಿ.ಕೆ.ವಿ.ಕೆ) ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯ ಈ ಕೆಳಕಂಡ 19 ಹುದ್ದೆಗಳನ್ನು ದಿ: 01–04–2014ರಿಂದ 31–03–2015ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಆದೇಶ ನೀಡಲಾಗಿತ್ತು.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು (ಅಪರ ನಿಯಂತ್ರಕರು) | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 02 |
| 03 | ಲೆಕ್ಕ ಸಹಾಯಕರು | 13 |
| 04 | ಕಿರಿಯ ಲೆಕ್ಕ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | **ಒಟ್ಟು** | **19** |

ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ರವರ ಪತ್ರದಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಸರ್ಕಾರಿ ಲೆಕ್ಕಪರಿಶೋಧಕರ ಕಛೇರಿಯ 19 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01–04–2015 ರಿಂದ ದಿ: 31–03–2016ರ ಅವಧಿಯವರೆಗೆ ಅಥವಾ ರಾಜ್ಯ ಲೆಕ್ಕಪತ್ರ ಇಲಾಖೆಯ ಪುನರ್ ಸಂಘಟನೆಯು ಅನುಮೋದನೆಯಾಗುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 419 ರಾಲೆಪ 2008 ಬೆಂಗಳೂರು, ದಿನಾಂಕ: 30–03–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ (ಜಿ.ಕೆ.ವಿ.ಕೆ) ಸರ್ಕಾರಿ ಲೆಕ್ಕಪರಿಶೋಧಕರ ಕಚೇರಿಯಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 01–04–2015 ರಿಂದ ಮೂರು ತಿಂಗಳವರೆಗೆ ಅಥವಾ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಮರುವಿನ್ಯಾಸ ಆದೇಶ ಹೊರಡಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಅನುಮೋದನೆ ನೀಡಲಾಗಿದೆ.

| | | |
|---|---|---|
| 01 | ಸರ್ಕಾರಿ ಲೆಕ್ಕಪರಿಶೋಧಕರು (ಅಪರ ನಿಯಂತ್ರಕರು) | 01 |
| 02 | ಲೆಕ್ಕಪರಿಶೋಧನಾಧಿಕಾರಿಗಳು | 02 |

| | | |
|---|---|---|
| 03 | ಲೆಕ್ಕ ಸಹಾಯಕರು | 13 |
| 04 | ಕಿರಿಯ ಲೆಕ್ಕ ಸಹಾಯಕರು | 01 |
| 05 | ಬೆರಳಚ್ಚುಗಾರರು | 01 |
| 06 | ಗ್ರೂಪ್ ಡಿ ನೌಕರರು | 01 |
| | ಒಟ್ಟು | 19 |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿ: 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**PR-275**

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ(ಆಡಳಿತ & ಮುಂಗಡ).

## ತೋಟಗಾರಿಕೆ ಸಚಿವಾಲಯ

**ವಿಷಯ :** ಹುಣಸೂರು ಪಟ್ಟಣದಲ್ಲಿ ಶ್ರೀ ಡಿ.ದೇವರಾಜು ಅರಸು ಭವನ ನಿರ್ಮಿಸಲು ತೋಟಗಾರಿಕೆ ಇಲಾಖೆಗೆ ಸೇರಿದ 2.00 ಎಕರೆ ಜಮೀನನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ನೀಡುವ ಬಗ್ಗೆ.

**ಓದಲಾಗಿದೆ:** ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:ಇಡಿ/ಕೆ.ಎಸ್.ಎಚ್.ಡಿ.ಎ:ಸತೋಅ2:07:2010–11/834, ದಿನಾಂಕ: 14–01–2015

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ, ಮೈಸೂರು ಜಿಲ್ಲೆ, ಹುಣಸೂರು ಪಟ್ಟಣದಲ್ಲಿ ಶ್ರೀ ಡಿ.ದೇವರಾಜು ಅರಸು ಭವನ ನಿರ್ಮಾಣ ಮಾಡಲು ಮಾನ್ಯ ಮುಖ್ಯಮಂತ್ರಿಯವರು 2014–15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿದ್ದು, ಭವನ ನಿರ್ಮಾಣ ಮಾಡಲು ಹುಣಸೂರು ತಾಲ್ಲೂಕು ದೊಡ್ಡ ಹುಣಸೂರಿನ ಸರ್ವೆ ನಂ.94/2ರಲ್ಲಿ 29 ಗುಂಟೆ, ಸರ್ವೆ ನಂ.94/3ರಲ್ಲಿ 1 ಎಕರೆ 07 ಗುಂಟೆ ಮತ್ತು ಸರ್ವೆ ನಂ.97/1ರಲ್ಲಿ 04 ಗುಂಟೆ ಒಟ್ಟು 2.00 ಎಕರೆ ತೋಟಗಾರಿಕೆ ಇಲಾಖೆಗೆ ಸೇರಿದ ಜಮೀನನ್ನು ಶ್ರೀ ಡಿ.ದೇವರಾಜು ಅರಸು ಭವನ ನಿರ್ಮಾಣ ಮಾಡಲು ತೋಟಗಾರಿಕೆ ಇಲಾಖೆಯಿಂದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ನೀಡುವ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸುವಂತೆ ದಿ: 07–01–2015ರ ಪ್ರಧಾನ ಕಾರ್ಯದರ್ಶಿಗಳು, ತೋಟಗಾರಿಕೆ ಇಲಾಖೆ ಇವರ ಅ.ಸ.ಪತ್ರದಲ್ಲಿ ಸೂಚಿಸಿದ ಹಿನ್ನೆಲೆಯಲ್ಲಿ ತೋಟಗಾರಿಕೆ ನಿರ್ದೇಶಕರು ಈ ಕೆಳಕಂಡ ಅಂಶಗಳನ್ನು ಅವಗಾಹನೆಗಾಗಿ ಸಲ್ಲಿಸಿರುತ್ತಾರೆ.

❖ ಮೈಸೂರು ಜಿಲ್ಲೆ ಹುಣಸೂರು ಪಟ್ಟಣದಲ್ಲಿರುವ ಹುಣಸೂರು ತೋಟಗಾರಿಕೆ ಕ್ಷೇತ್ರದ ಸರ್ವೆ ನಂ.94/1, 94/2, 94/3, 97/1, 98, 100/2ಎ, 100/2ಬಿರಲ್ಲಿ ಒಟ್ಟು 18.19 ಎಕರೆ ಜಮೀನು ಇರುತ್ತದೆ.

❖ ಹುಣಸೂರು ತೋಟಗಾರಿಕೆ ಕ್ಷೇತ್ರದ ಮಧ್ಯ ಭಾಗದಲ್ಲಿ ಮೈಸೂರು ಮಂಗಳೂರು ರಾಜ್ಯ ಹೆದ್ದಾರಿಯು ಅಂದಾಜು 2 ಎಕರೆ ಪ್ರದೇಶದಲ್ಲಿ ಹಾದು ಹೋಗಿರುತ್ತದೆ ಹಾಗೂ ಉಳಿಕೆ 16.19 ಎಕರೆ ಪ್ರದೇಶ ಮಾತ್ರ ಇಲಾಖೆಯ ಉಪಯೋಗದಲ್ಲಿರುತ್ತದೆ.

❖ ಸದರಿ 16.19 ಎಕರೆ ಜಮೀನಿನಲ್ಲಿ ಮಾವು, ತೆಂಗು, ಸೀಬೆ, ಸಪೋಟ, ದಾಳಿಂಬೆ, ನೆಲ್ಲಿ, ನೇರಳೆ, ಸೀತಾಫಲ ಹಾಗೂ ಇತರೆ ತೋಟಗಾರಿಕೆ ಬೆಳೆಗಳನ್ನು ಬೆಳೆಯಲಾಗಿರುತ್ತದೆ ಹಾಗೂ ಉತ್ತಮ ಗುಣ ಮಟ್ಟದ ಕಸಿ/ಸಸಿಗಳನ್ನು ಅಭಿವೃದ್ಧಿ ಪಡಿಸಿ ರೈತರಿಗೆ ಮಾರಾಟ ಮಾಡಲಾಗುತ್ತಿದೆ.

❖ ಹುಣಸೂರು ತೋಟಗಾರಿಕೆ ಕ್ಷೇತ್ರದಲ್ಲಿ ಶ್ರೀ ಡಿ.ದೇವರಾಜು ಅರಸು ಭವನ ನಿರ್ಮಾಣ ಮಾಡಲು 2 ಎಕರೆ ಜಮೀನನ್ನು ನೀಡುವ ಕುರಿತು ದಿ: 19–12–2014 ರಂದು ಉಪವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹುಣಸೂರು ಉಪ ವಿಭಾಗರವರು ತೋಟಗಾರಿಕೆ ಉಪನಿರ್ದೇಶಕರು (ಜಿಪಂ) ಮೈಸೂರು, ಹಿ.ಸ.ತೋ.ನಿ(ಜಿಪಂ) ಹುಣಸೂರು, ಹಿ.ಸ.ತೋ.ನಿ (ಜಿಪಂ) ಮೈಸೂರು ಮತ್ತು ಹಿ.ಸ.ತೋ.ನಿ (ರಾವ) ಮೈಸೂರುರವರೊಂದಿಗೆ ಸ್ಥಳ ಪರಿಶೀಲನೆ ಮಾಡಿರುತ್ತಾರೆ.

❖ ಸದರಿ 2 ಎಕರೆ ಪ್ರದೇಶದಲ್ಲಿ 25 ವರ್ಷದ 3 ತೆಂಗು ಹಾಗೂ 10 ವರ್ಷದ 30 ಸಪೋಟ ಮರಗಳಿರುತ್ತವೆ.

❖ ಸದರಿ 2 ಎಕರೆ ಜಮೀನಿಗೆ ಪರ್ಯಾಯವಾಗಿ ಹುಣಸೂರು ನಗರದಲ್ಲಿ ಮತ್ತು ಧರ್ಮಾಪುರ ಗ್ರಾಮದ ವ್ಯಾಪ್ತಿಯಲ್ಲಿ ತೋಟಗಾರಿಕೆ ಕ್ಷೇತ್ರ ನಿರ್ಮಾಣ ಮಾಡಲು ಯೋಗ್ಯವಾದ ಜಾಗವನ್ನು ಪರ್ಯಾಯವಾಗಿ ನೀಡಲಾಗುವುದೆಂದು ಸ್ಥಳ ಪರಿಶೀಲನೆ ಸಮಯದಲ್ಲಿ ಉಪವಿಭಾಗಾಧಿಕಾರಿಗಳು, ಕಂದಾಯ ಇಲಾಖೆ, ಹುಣಸೂರು ಉಪ ವಿಭಾಗ, ಮೈಸೂರು ಜಿಲ್ಲೆ ರವರು ತಿಳಿಸಿರುವ ಹಿನ್ನೆಲೆಯಲ್ಲಿ ಕಂದಾಯ ಇಲಾಖೆಯಿಂದ ಯೋಗ್ಯವಾದ ಭೂಮಿಯನ್ನು ಪಡೆದು, ಹುಣಸೂರು ತೋಟಗಾರಿಕೆ ಕ್ಷೇತ್ರದಲ್ಲಿ 2 ಎಕರೆ ಜಮೀನನ್ನು ನೀಡುವ ಬಗ್ಗೆ ಪರಾಮರ್ಶಿಸಿ ತೀರ್ಮಾನಿಸಬಹುದಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಮುಂದುವರೆದು, ಈ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಡಿ.ದೇವರಾಜು ಅರಸು ಭವನ ನಿರ್ಮಾಣ ಮಾಡಲು ಜಿಲ್ಲಾಡಳಿತ ಗುರುತಿಸಿರುವ ಹುಣಸೂರು ತೋಟಗಾರಿಕೆ ಕ್ಷೇತ್ರದ ಸರ್ವೆ ನಂ94/2ರಲ್ಲಿ 29 ಗುಂಟೆ, ಸರ್ವೆ ನಂ.94/3ರಲ್ಲಿ 1 ಎಕರೆ 07 ಗುಂಟೆ ಮತ್ತು ಸರ್ವೆ ನಂ.97/1ರಲ್ಲಿ 04 ಗುಂಟೆ ಒಟ್ಟು 2.00 ಎಕರೆ ಜಮೀನಿಗೆ ಪರ್ಯಾಯವಾಗಿ ತೋಟಗಾರಿಕೆ ಕ್ಷೇತ್ರ ನಿರ್ಮಾಣ ಮಾಡಲು ಯೋಗ್ಯವಾದ ಜಾಗವನ್ನು ಹುಣಸೂರು ನಗರದಲ್ಲಿ ತೋಟಗಾರಿಕೆ ಇಲಾಖೆಗೆ ನೀಡುವ ಷರತ್ತಿಗೊಳಪಟ್ಟು ಶ್ರೀ ಡಿ.ದೇವರಾಜು ಅರಸು ಭವನ ನಿರ್ಮಾಣ ಮಾಡಲು ಹುಣಸೂರು ತೋಟಗಾರಿಕೆ ಕ್ಷೇತ್ರದ ಮೇಲ್ಕಂಡ ಸರ್ವೆ ನಂಬರ್‌ಗಳಲ್ಲಿನ 2 ಎಕರೆ ಜಮೀನನ್ನು ನೀಡಬಹುದಾಗಿರುತ್ತದೆಂದು ತೋಟಗಾರಿಕೆ ನಿರ್ದೇಶಕರು ಅಭಿಪ್ರಾಯಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 47 ತೋಇವಿ 2015 ಬೆಂಗಳೂರು ದಿನಾಂಕ: 20-02-2015**

ಶ್ರೀ ಡಿ.ದೇವರಾಜು ಅರಸು ಭವನ ನಿರ್ಮಾಣ ಮಾಡಲು ಮೈಸೂರು ಜಿಲ್ಲಾಡಳಿತ ಗುರುತಿಸಿರುವ ತೋಟಗಾರಿಕೆ ಇಲಾಖೆಗೆ ಸೇರಿದ ಹುಣಸೂರು ತೋಟಗಾರಿಕೆ ಕ್ಷೇತ್ರದ ಸರ್ವೆ ನಂ 94/2ರಲ್ಲಿ 29 ಗುಂಟೆ, ಸರ್ವೆ ನಂ.94/3ರಲ್ಲಿ 1 ಎಕರೆ 07 ಗುಂಟೆ ಮತ್ತು ಸರ್ವೆ ನಂ.97/1ರಲ್ಲಿ 04 ಗುಂಟೆ ಒಟ್ಟು 2.00 ಎಕರೆ ಜಮೀನನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಹಸ್ತಾಂತರಿಸಲು ಆದೇಶಿಸಲಾಗಿದೆ.

**ಷರತ್ತುಗಳು :**

1) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ನೀಡುವ ಜಮೀನಿಗೆ ಪರ್ಯಾಯವಾಗಿ ತೋಟಗಾರಿಕೆ ಕ್ಷೇತ್ರ ನಿರ್ಮಾಣ ಮಾಡಲು ಯೋಗ್ಯವಾದ ಜಾಗವನ್ನು ಕಂದಾಯ ಇಲಾಖೆಯಿಂದ ಪಡೆಯಲು ಅಗತ್ಯ ಕ್ರಮ ತೆಗೆದುಕೊಳ್ಳುವುದು.

2) ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯ ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜನ್ಸಿಯ ಕಾರ್ಯಕಾರಿ ಸಮಿತಿಯ ಮುಂದಿನ ಸಭೆಯಲ್ಲಿ ಈ ಬಗ್ಗೆ ಅನುಮೋದನೆಯನ್ನು ಪಡೆಯಬಹುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ.ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ

PR-276

SC-25

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಎಸ್.ಪ್ರಸನ್ನ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ವಿ.ವಿ.ಸಾಗರ ಇವರು ಸರ್ಕಾರಿ ಕೆಲಸಕ್ಕೆ ಗೈರು ಹಾಜರಾಗಿರುವ ಪ್ರಯುಕ್ತ - ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**

1) ಆದೇಶ ಸಂಖ್ಯೆ: ಪಸಂಮೀ/121/ಮೀಇಸೇ/2009, ದಿನಾಂಕ: 16-10-2009.
2) ಪತ್ರ ಸಂಖ್ಯೆ: ಆಡಳಿತ (2)/15/2012-13, ದಿನಾಂಕ: 10-05-2013, 03-06-2013, 03-07-2013, 17-03-2014 ಮತ್ತು 29-10-2014.
3) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಿಎಸ್‌ಸಿ/176/ಸಿಎನ್‌ಎಸ್13 ದಿನಾಂಕ: 09-12-2013.
4) ಸುತ್ತೋಲೆ ಸಂಖ್ಯೆ: ಸಿಆಸುಇ/18/ಸೇಇನಿ/2001, ದಿನಾಂಕ: 14-09-2001.

**ಪ್ರಸ್ತಾವನೆ:-**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ, ಶ್ರೀ ಪ್ರಸನ್ನ ಎಸ್., ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ವಿ.ವಿ.ಸಾಗರ ಅವರು ಜಲಕೃಷಿ ಮತ್ತು ಮೀನುಗಾರಿಕೆ ಶಾಖೆ, ಯೂನಿವರ್ಸಿಟಿ ಆಫ್ ಅರ್ಕಾನ್ಸಸ್, ಅಟ್ ಪೈನ್ ಬ್ಲಫ್, ಅಮೇರಿಕಾ ಸಂಯುಕ್ತ ಸಂಸ್ಥಾನ ಇಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಯಾಗಿ ಹೆಚ್ಚಿನ ಅಧ್ಯಯನ ನಡೆಸಲು ಹಾಗೂ ಸಂಶೋಧನೆಯಲ್ಲಿ ಸಹಾಯಕನಾಗಿ ಭಾಗವಹಿಸಲು, ಕಾರ್ಯನಿರ್ವಹಿಸುತ್ತಿರುವ ಹುದ್ದೆಯ ಕರ್ತವ್ಯದಿಂದ ಬಿಡುಗಡೆ ಹೊಂದುವ ದಿನದಿಂದ 2 ವರ್ಷಗಳವರೆಗೆ ಕೆಲವೊಂದು ಷರತ್ತಿಗೊಳಪಟ್ಟು ಸರ್ಕಾರ ಮಂಜೂರಾತಿ ನೀಡಿರುತ್ತದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಿರ್ದೇಶಕರು, ಮೀನುಗಾರಿಕೆ ಇಲಾಖೆ ಇವರ ಪತ್ರಗಳಲ್ಲಿ, ಶ್ರೀ ಎಸ್.ಪ್ರಸನ್ನ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ವಿ.ವಿ.ಸಾಗರ ಇವರು, ದಿನಾಂಕ: 16-10-2009ರ ಆದೇಶದಲ್ಲಿ ನಿಗದಿಪಡಿಸಲಾದ ಷರತ್ತಿನಂತೆ ಸದರಿಯವರು ಕರ್ತವ್ಯನಿರ್ವಹಿಸುತ್ತಿದ್ದ ಹುದ್ದೆಯಿಂದ ಬಿಡುಗಡೆ ಹೊಂದದೆ ದಿನಾಂಕ: 13-08-2009 ರಿಂದಲೇ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ಮುಂದುವರೆದು, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 16-10-2009ರ ಆದೇಶದಲ್ಲಿ ಪ್ರಸ್ತಾಪಿಸಲಾದ ಉನ್ನತ ವ್ಯಾಸಂಗದ ಅವಧಿ 2 ವರ್ಷಗಳ ಅವಧಿಯು ಪೂರ್ಣಗೊಂಡಿದ್ದರೂ, ಸಹ ಆ ಅವಧಿಯವರೆವಿಗೂ ಸದರಿಯವರು ಯಾವುದೇ ತರಹದ ರಜಾ ಅರ್ಜಿಯನ್ನು ಸಹ ಸಲ್ಲಿಸದೆ, ಅಧ್ಯಯನ ಅವಧಿಯ ಮುಂದುವರಿಕೆಗೆ ಸರ್ಕಾರದ ಮಂಜೂರಾತಿಯನ್ನು ಪಡೆಯದೆ, ಸರ್ಕಾರ ವಿಧಿಸಿದ್ದ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿ, ಸರ್ಕಾರದ ಕಛೇರಿ ಕೆಲಸಗಳಲ್ಲಿ ನಿರ್ಲಕ್ಷ್ಯ ತೋರಿ ಗೈರು ಹಾಜರಾದ ಹಿನ್ನೆಲೆಯಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕಾರಣ ಕೇಳಿ ತಿಳುವಳಿಕೆ ಪತ್ರವನ್ನು ಮೀನುಗಾರಿಕೆ ಉಪ ನಿರ್ದೇಶಕರು, ಶಿವಮೊಗ್ಗರವರ ಮೂಲಕ ಜಾರಿಗೊಳಿಸಲಾಗಿದೆ.

ಸದರಿ ಕಾರಣ ಕೇಳಿ ತಿಳುವಳಿಕೆ ಪತ್ರ ಹಿಂದಿರುಗಿಸಲ್ಪಟ್ಟಿದೆ ಎಂದು ಮೀನುಗಾರಿಕೆ ಉಪ ನಿರ್ದೇಶಕರು, ಶಿವಮೊಗ್ಗರವರು ಪತ್ರ ಸಂಖ್ಯೆ: ಸಿಬ್ಬಂದಿ/56/2009-10, ದಿನಾಂಕ: 24-11-2012 ರಲ್ಲಿ ವರದಿ ಮಾಡಿದ್ದು, ಕಾರಣ ಕೇಳಿ ತಿಳುವಳಿಕೆ ಪತ್ರ ಹಿಂದಿರುಗಿಸಲ್ಪಟ್ಟ ಹಿನ್ನೆಲೆಯಲ್ಲಿ

ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957 ನಿಯಮ 28(ಎ) ಅನ್ವಯ ಅನಧಿಕೃತ ಗೈರು ಹಾಜರಿ ಪ್ರಕಟಣೆಯನ್ನು ದಿನಾಂಕ: 13-02-2013ರ ಪ್ರಜಾವಾಣಿ ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟಿಸಿ ಆರೋಪಿಗೆ 15 ದಿನಗಳೊಳಗಾಗಿ ರಕ್ಷಣಾ ಹೇಳಿಕೆ ಸಲ್ಲಿಸಲು ಇಚ್ಛಿಸಿದಲ್ಲಿ ಶಿಸ್ತು ಪ್ರಾಧಿಕಾರಕ್ಕೆ ಕಳುಹಿಸಲು ಸೂಚಿಸಿ ಹೇಳಿಕೆ ಸಲ್ಲಿಸದಿದ್ದಲ್ಲಿ, ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಲಾಗಿದೆ. ಆದರೆ, ಶ್ರೀ ಎಸ್.ಪ್ರಸನ್ನರವರು ಸದರಿ ಪ್ರಕಟಣೆಗೆ ಈವರೆವಿಗೂ ಯಾವುದೇ ರೀತಿಯಲ್ಲಿ ಪ್ರತಿಕ್ರಿಯಿಸಿರುವುದಿಲ್ಲ.

ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಪ್ರಸನ್ನ, ಮೀನಿಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ವಿ.ವಿ.ಸಾಗರ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(vii) ಮತ್ತು (viii) ರನ್ವಯ ದಿನಾಂಕ: 13-08-2009 ರಿಂದಲೇ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶ ಹೊರಡಿಸಲು ಮೀನುಗಾರಿಕೆ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಕರ್ನಾಟಕ ಲೋಕಸೇವಾ ಆಯೋಗದ ಪತ್ರದಲ್ಲಿ, ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ವಿನಿಯಮಗಳು 2000ರ ನಿಯಮ 5ರ ತಿದ್ದುಪಡಿಯನ್ವಯ ರಾಜ್ಯ ಸರ್ಕಾರದ 'ಎ' ಮತ್ತು 'ಬಿ' ಹುದ್ದೆಯ ಅಧಿಕಾರಿಗಳ ಅನಧಿಕೃತ ಗೈರು ಹಾಜರಿಯು ರುಜುವಾತಾದ ಸಂದರ್ಭದಲ್ಲಿ, ಅವರ ವಿರುದ್ಧ ಯಾವುದೇ ದಂಡನೆಗಳನ್ನು ವಿಧಿಸಲು ಪ್ರಸ್ತಾಪಿಸಿದಲ್ಲಿ, ಅಂತಹ ಪ್ರಕರಣಗಳನ್ನು ಆಯೋಗದೊಂದಿಗೆ ಸಮಾಲೋಚಿಸುವ ಅಗತ್ಯವಿಲ್ಲವೆಂದು ಸಂವಾಹಿಸಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸುತ್ತೋಲೆಯಲ್ಲಿ, ಅಧಿಕಾರಿ / ನೌಕರರು ಸರ್ಕಾರಿ ಸೇವೆಗೆ ನಾಲ್ಕು ತಿಂಗಳು ಮೀರಿದ ಅನಧಿಕೃತ ಗೈರು ಹಾಜರಾತಿಗೆ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಲು ಅವಕಾಶ ಕಲ್ಪಿಸಲಾಗಿದೆ.

ಮೀನುಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಪಸಂಮೀ 80 ಮೀಇಸೇ 2013, ಬೆಂಗಳೂರು ದಿನಾಂಕ: 08-04-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಪ್ರಸನ್ನ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2), ವಿ.ವಿ.ಸಾಗರ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು ದಿನಾಂಕ: 13-08-2009 ರಿಂದ ಸರ್ಕಾರಿ ಸೇವೆಗೆ ಗೈರು ಹಾಜರಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(iii) ಅನ್ನು ಓದಿಕೊಂಡು ಸದರಿ ನಿಯಮಾವಳಿಗಳ ನಿಯಮ 14(ii)ರನ್ವಯ ದಿನಾಂಕ: 13-08-2009 ರಿಂದ ಪೂರ್ವಾನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ರಶ್ಮಿ ಶಿವಶಂಕರ ಪೋಳ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀನುಗಾರಿಕೆ)

PR-277
SC-25

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಡಿ. ದೇವರಾಜ ಅರಸು, ಮಾಜಿ ಮುಖ್ಯಮಂತ್ರಿಗಳು ಇವರ ಜನ್ಮಶತಮಾನೋತ್ಸವ ಆಚರಿಸುವ ಸಂಬಂಧದಲ್ಲಿ ಉನ್ನತ ಮಟ್ಟದ ಸಮಿತಿ ಮತ್ತು ಕಾರ್ಯಕಾರಿ ಸಮಿತಿಯನ್ನು ರಚಿಸುವ ಬಗ್ಗೆ.

**ಪ್ರಸ್ತಾವನೆ:**

ಸರ್ಕಾರವು, ಶ್ರೀ ಡಿ.ದೇವರಾಜ ಅರಸು, ಮಾಜಿ ಮುಖ್ಯಮಂತ್ರಿಗಳು ಇವರ ಜನ್ಮಶತಮಾನೋತ್ಸವ ಆಚರಣೆಯನ್ನು 20ನೇ ಆಗಸ್ಟ್ 2015 ರಿಂದ 20ನೇ ಆಗಸ್ಟ್ 2016ರ ವರೆಗೆ ಆಚರಿಸಲು ನಿರ್ಧರಿಸಿದೆ. ಈ ಸಂಬಂಧದಲ್ಲಿ ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಒಂದು ಉನ್ನತ ಮಟ್ಟದ ಸಮಿತಿಯನ್ನು ಹಾಗೂ ಕಾರ್ಯಕಾರಿ ಸಮಿತಿಯನ್ನು ರಚಿಸುವ ಅವಶ್ಯಕತೆ ಇರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ.ಹಿಂವಕ 210 ಬಿಸಿಎ 2015 (ಭಾಗ), ಬೆಂಗಳೂರು, ದಿನಾಂಕ 04-07-2015.**

ಸರ್ಕಾರವು, ಶ್ರೀ ಡಿ.ದೇವರಾಜ ಅರಸು, ಮಾಜಿ ಮುಖ್ಯಮಂತ್ರಿಗಳು ಇವರ ಜನ್ಮಶತಮಾನೋತ್ಸವ ಆಚರಣೆಯನ್ನು 20ನೇ ಆಗಸ್ಟ್ 2015 ರಿಂದ 20ನೇ ಆಗಸ್ಟ್ 2016ರ ವರೆಗೆ ಆಚರಿಸುವ ಸಂಬಂಧದಲ್ಲಿ ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಈ ಕೆಳಗಿನಂತೆ ಉಪಾಧ್ಯಕ್ಷರು ಮತ್ತು ಸದಸ್ಯರನ್ನು ಒಳಗೊಂಡ ಉನ್ನತ ಮಟ್ಟದ ಸಮಿತಿಯನ್ನು ಹಾಗೂ ಈ ಕೆಳಗಿನಂತೆ ಅಧ್ಯಕ್ಷರು ಮತ್ತು ಸದಸ್ಯರನ್ನು ಒಳಗೊಂಡ ಕಾರ್ಯಕಾರಿ ಸಮಿತಿಯನ್ನು ರಚಿಸಿ ಆದೇಶಿಸಿದೆ.

1) ಡಿ. ದೇವರಾಜ ಅರಸು, ಮಾಜಿ ಮುಖ್ಯಮಂತ್ರಿಗಳ ಜನ್ಮಶತಮಾನೋತ್ಸವ ಆಚರಣೆಗೆ ಸಂಬಂಧಿಸಿದಂತೆ ಉನ್ನತ ಮಟ್ಟದ ಸಮಿತಿ.

| ಕ್ರಮ ಸಂಖ್ಯೆ | ಹೆಸರು, ಹುದ್ದೆ ಮತ್ತು ವಿಳಾಸ | |
|---|---|---|
| 1 | ಶ್ರೀ ಸಿದ್ದರಾಮಯ್ಯ,<br>ಮಾನ್ಯ ಮುಖ್ಯಮಂತ್ರಿಯವರು, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು. | ಅಧ್ಯಕ್ಷರು |

| ಕ್ರಮ ಸಂಖ್ಯೆ | ಹೆಸರು, ಹುದ್ದೆ ಮತ್ತು ವಿಳಾಸ | |
|---|---|---|
| 2 | ಶ್ರೀ ಹೆಚ್.ಆಂಜನೇಯ,<br>ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು, ಕೊಠಡಿ ಸಂ.336, 3ನೇ ಮಹಡಿ, ವಿಧಾನಸೌಧ, ಬೆಂಗಳೂರು. | ಉಪಾಧ್ಯಕ್ಷರು |
| 3 | ಶ್ರೀ ಎಸ್.ಎಂ. ಕೃಷ್ಣ,<br>ಮಾಜಿ ಮುಖ್ಯಮಂತ್ರಿಗಳು, ನಂ. 143, 5ನೇ ಅಡ್ಡರಸ್ತೆ, 9ನೇ ಮುಖ್ಯರಸ್ತೆ, ಸದಾಶಿವನಗರ, ಬೆಂಗಳೂರು. | ಸದಸ್ಯರು |
| 4 | ಶ್ರೀ ಎಂ. ವೀರಪ್ಪ ಮೊಯಿಲಿ,<br>ಮಾನ್ಯ ಸಂಸದರು–ಚಿಕ್ಕಬಳ್ಳಾಪುರ ಲೋಕಸಭಾ ಕ್ಷೇತ್ರ ಮಾನ್ಯ ಮಾಜಿ ಮುಖ್ಯಮಂತ್ರಿಗಳು, ನಂ. 1, ಆರ್.ಟಿ. ನಗರ, ಎಂ.ಎಲ್.ಎ. ಲೇಔಟ್, ಬೆಂಗಳೂರು–560 032. | ಸದಸ್ಯರು |
| 5 | ಶ್ರೀ ಎನ್. ಧರಂಸಿಂಗ್,<br>ಮಾಜಿ ಮುಖ್ಯಮಂತ್ರಿಗಳು, ನಂ. 46/ಎ, ಫೇರ್‌ಫೀಲ್ಡ್ ಲೇಔಟ್, ರೇಸ್‌ಕೋರ್ಸ್ ರಸ್ತೆ, ಬೆಂಗಳೂರು. | ಸದಸ್ಯರು |
| 6 | ಶ್ರೀ ಜಗದೀಶ್ ಶೆಟ್ಟರ್,<br>ಮಾನ್ಯ ವಿರೋಧ ಪಕ್ಷದ ನಾಯಕರು, ಕರ್ನಾಟಕ ವಿಧಾನಸಭೆ ಹಾಗೂ ಮಾಜಿ ಮುಖ್ಯಮಂತ್ರಿಗಳು ಕೊಠಡಿ ಸಂ. 161, ವಿಧಾನಸೌಧ, ಬೆಂಗಳೂರು. | ಸದಸ್ಯರು |
| 7 | ಶ್ರೀ ಮಲ್ಲಿಕಾರ್ಜುನ ಖರ್ಗೆ,<br>ಮಾನ್ಯ ಲೋಕಸಭಾ ಸದಸ್ಯರು, ಕಲಬುರಗಿ ಕ್ಷೇತ್ರ ಹಾಗೂ ಮಾಜಿ ಕೇಂದ್ರ ಸಚಿವರು, ನಂ. 289, 289, 17ನೇ ಅಡ್ಡರಸ್ತೆ, ಸದಾಶಿವನಗರ, ಬೆಂಗಳೂರು–80. | ಸದಸ್ಯರು |
| 8 | ಶ್ರೀ ಆರ್.ವಿ. ದೇಶಪಾಂಡೆ,<br>ಮಾನ್ಯ ಉನ್ನತ ಶಿಕ್ಷಣ ಹಾಗೂ ಪ್ರವಾಸೋದ್ಯಮ ಸಚಿವರು, ಕೊಠಡಿ ಸಂ. 314, 3ನೇ ಮಹಡಿ, ವಿಧಾನಸೌಧ, ಬೆಂಗಳೂರು–560 032 | ಸದಸ್ಯರು |
| 9 | ಶ್ರೀ ಹೆಚ್.ಕೆ. ಪಾಟೀಲ್,<br>ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು, ಕೊಠಡಿ ಸಂ. 329, 3ನೇ ಮಹಡಿ, ವಿಧಾನಸೌಧ,<br>ಬೆಂಗಳೂರು. | ಸದಸ್ಯರು |
| 10 | ಶ್ರೀ ಎಂ.ವಿ. ರಾಜಶೇಖರನ್,<br>ಮಾಜಿ ಕೇಂದ್ರ ಸಚಿವರು, ನಂ. 20/1, ಕನಕಪುರ ರಸ್ತೆ, ಬಸವನಗುಡಿ, ಬೆಂಗಳೂರು–560 094 | ಸದಸ್ಯರು |
| 11 | ಶ್ರೀ ಆರ್.ಎಲ್. ಜಾಲಪ್ಪ,<br>ಮಾನ್ಯ ಮಾಜಿ ಕೇಂದ್ರ ಸಚಿವರು, ನಂ. 147,<br>2ನೇ ಮುಖ್ಯರಸ್ತೆ, 2ನೇ ಹಂತ, 1ನೇ ಬ್ಲಾಕ್,<br>ಆರ್.ಎಂ.ವಿ. ಬಡಾವಣೆ,<br>ಬೆಂಗಳೂರು–560 094. | ಸದಸ್ಯರು |
| 12 | ಶ್ರೀ ಸಿ.ಕೆ. ಜಾಫರ್ ಷರೀಫ್,<br>ಮಾನ್ಯ ಮಾಜಿ ಕೇಂದ್ರ ಸಚಿವರು, ನಂ. 106/2, ಕೋಗಿಲು ಗ್ರಾಮ, ಬೆಂಗಳೂರು. | ಸದಸ್ಯರು |
| 13 | ಶ್ರೀ ಬಿ.ಕೆ. ಹರಿಪ್ರಸಾದ್,<br>ಮಾನ್ಯ ರಾಜ್ಯ ಸಭಾ ಸದಸ್ಯರು ಹಾಗೂ ಪ್ರಧಾನ ಕಾರ್ಯದರ್ಶಿಗಳು, ಎ.ಐ.ಸಿ.ಸಿ., ನಂ. 84, 6ನೇ ಮುಖ್ಯರಸ್ತೆ, ಮಲ್ಲೇಶ್ವರಂ,<br>ಬೆಂಗಳೂರು–560 003. | ಸದಸ್ಯರು |

| ಕ್ರಮ ಸಂಖ್ಯೆ | ಹೆಸರು, ಹುದ್ದೆ ಮತ್ತು ವಿಳಾಸ | |
|---|---|---|
| 14 | ಶ್ರೀ ಕೆ. ಆರ್. ರಮೇಶಕುಮಾರ್,<br>ಮಾನ್ಯ ಶಾಸಕರು, ಹಾಗೂ ಮಾಜಿ ಸಭಾಧ್ಯಕ್ಷರು,<br>ಕರ್ನಾಟಕ ವಿಧಾನಸಭೆ, ನಂ. 477, 7ನೇ ಮುಖ್ಯರಸ್ತೆ, ಪಶ್ಚಿಮ ಭಾಗ, ಅಮರಜ್ಯೋತಿ ಲೇಔಟ್, ದೊಮ್ಮಲೂರು, ಬೆಂಗಳೂರು. | ಸದಸ್ಯರು |
| 15 | ಶ್ರೀ ಆರ್. ರೋಷನ್ ಬೇಗ್,<br>ಮಾನ್ಯ ಮೂಲಭೂತ ಸೌಕರ್ಯ, ವಾರ್ತಾ ಮತ್ತು ಹಜ್ ಸಚಿವರು,<br>ಕೊಠಡಿ ಸಂ. 38, ವಿಕಾಸಸೌಧ, ಬೆಂಗಳೂರು–5. | ಸದಸ್ಯರು |
| 16 | ಶ್ರೀ ಹೆಚ್. ವಿಶ್ವನಾಥ್<br>ಮಾಜಿ ಸಂಸದರು ಹಾಗೂ ಮಾಜಿ ಸಚಿವರು, ವಿನಾಯಕ ಬಡಾವಣೆ, 2ನೇ ಕ್ರಾಸ್, ಕೆ.ಆರ್. ನಗರ, ಮೈಸೂರು ಜಿಲ್ಲೆ. | ಸದಸ್ಯರು |
| 17 | ಶ್ರೀ ಶ್ಯಾಮನೂರು ಶಿವಶಂಕರಪ್ಪ,<br>ಮಾನ್ಯ ತೋಟಗಾರಿಕೆ ಹಾಗೂ ಕೃಷಿ ಉತ್ಪನ್ನ ಮಾರುಕಟ್ಟೆ ಸಚಿವರು,<br>ಕೊಠಡಿ ಸಂಖ್ಯೆ: 342, 3ನೇ ಮಹಡಿ ವಿಧಾನ ಸೌಧ,<br>ಬೆಂಗಳೂರು. | ಸದಸ್ಯರು |
| 18 | ಶ್ರೀ ಕೆ.ಜೆ. ಜಾರ್ಜ್<br>ಮಾನ್ಯ ಗೃಹ ಸಚಿವರು, ಕೊಠಡಿ ಸಂಖ್ಯೆ: 316, 3ನೇ ಮಹಡಿ,<br>ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 19 | ಶ್ರೀ ಟಿ.ಬಿ. ಜಯಚಂದ್ರ,<br>ಮಾನ್ಯ ಕಾನೂನು, ಸಂಸದೀಯ, ಪಶುಸಂಗೋಪನೆ, ಮತ್ತು ಮುಜರಾಯಿ ಸಚಿವರು, ಕೊಠಡಿ ಸಂಖ್ಯೆ: 327, 3ನೇ ಮಹಡಿ, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 20 | ಶ್ರೀ ಹೆಚ್.ಎಸ್. ಮಹದೇವಪ್ರಸಾದ್,<br>ಮಾನ್ಯ ಸಹಕಾರ ಸಚಿವರು,<br>ಕೊಠಡಿ ಸಂಖ್ಯೆ: 328, 3ನೇ ಮಹಡಿ, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 21 | ಶ್ರೀ ವಿ. ಶ್ರೀನಿವಾಸ ಪ್ರಸಾದ್,<br>ಮಾನ್ಯ ಕಂದಾಯ ಸಚಿವರು,<br>ಕೊಠಡಿ ಸಂಖ್ಯೆ: 327, 3ನೇ ಮಹಡಿ, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 22 | ಡಾ॥ ಹೆಚ್.ಸಿ. ಮಹದೇವಪ್ಪ,<br>ಮಾನ್ಯ ಲೋಕೋಪಯೋಗಿ ಮತ್ತು ಒಳನಾಡು ಜಲಸಾರಿಗೆ ಸಚಿವರು,<br>ಕೊಠಡಿ ಸಂಖ್ಯೆ: 330, 3ನೇ ಮಹಡಿ, ವಿಧಾನ ಸೌಧ,<br>ಬೆಂಗಳೂರು. | ಸದಸ್ಯರು |
| 23 | ಶ್ರೀ ವೀರಣ್ಣ ಎ. ಮತ್ತಿಕಟ್ಟಿ,<br>ಮಾನ್ಯ ವಿಧಾನ ಪರಿಷತ್ ಸದಸ್ಯರು,<br>ಮಾಜಿ ವಿಧಾನ ಪರಿಷತ್ ಸಭಾಧ್ಯಕ್ಷರು,<br>ಪ್ರಿಯದರ್ಶಿನಿ, ಯು.ಬಿ.ಹಿಲ್ಸ್, ಧಾರವಾಡ. | ಸದಸ್ಯರು |
| 24 | ಶ್ರೀ ಕೆ.ಎಸ್. ಈಶ್ವರಪ್ಪ,<br>ಮಾನ್ಯ ವಿರೋಧ ಪಕ್ಷದ ನಾಯಕರು, ವಿಧಾನ ಪರಿಷತ್ ಹಾಗೂ ಮಾಜಿ ಉಪಮುಖ್ಯಮಂತ್ರಿಗಳು, ಕೊಠಡಿ ಸಂಖ್ಯೆ: 155, 1ನೇ ಮಹಡಿ, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 25 | ಶ್ರೀ ವಾಟಾಳ್ ನಾಗರಾಜ್,<br>ಮಾಜಿ ಶಾಸಕರು, ನಂ.329, 2ನೇ ಕ್ರಾಸ್, 2ನೇ ಬ್ಲಾಕ್, ಆರ್.ಎಂ.ವಿ. 2ನೇ ಹಂತ, ಬೆಂಗಳೂರು. | ಸದಸ್ಯರು |
| 26 | ಶ್ರೀ ಸಚ್ಚಿದಾನಂದ ಸ್ವಾಮಿ,<br>ಮಾಜಿ ಸಂಸದರು, ನಂ.406ಎ, 2ನೇ ಕ್ರಾಸ್, 3ನೇ ಬ್ಲಾಕ್,<br>ಕೋರಮಂಗಲ, ಬೆಂಗಳೂರು–34. | ಸದಸ್ಯರು |

| ಕ್ರಮ ಸಂಖ್ಯೆ | ಹೆಸರು, ಹುದ್ದೆ ಮತ್ತು ವಿಳಾಸ | |
|---|---|---|
| 27 | ಶ್ರೀ ಡಿ.ಬಿ. ಚಂದ್ರೇಗೌಡ,<br>ಮಾಜಿ ಸಚಿವರು, ನಂ.3, ಎಂ.ಎಲ್.ಎ. ಲೇಔಟ್, ಆರ್.ಟಿ.ನಗರ,<br>ಬೆಂಗಳೂರು–32. | ಸದಸ್ಯರು |
| 28 | ಶ್ರೀ ಎಂ. ಸಿ.ನಾಣಯ್ಯ,<br>ಮಾಜಿ ಸಚಿವರು, ಸ್ಟುವರ್ಟ್ ಹಿಲ್, ಮಡಿಕೇರಿ,<br>ಕೊಡಗು ಜಿಲ್ಲೆ. | ಸದಸ್ಯರು |
| 29 | ಶ್ರೀ ಬಿ. ಸುಬ್ಬಯ್ಯ ಶೆಟ್ಟಿ,<br>ಮಾಜಿ ಸಚಿವರು, ಬಿ.308, ನೀಲಾದ್ರಿ ಮಹಲ್, ನಂದಿದುರ್ಗ ರಸ್ತೆ,<br>ಬೆಂಗಳೂರು-570056. | ಸದಸ್ಯರು |
| 30 | ಶ್ರೀ ಎ.ಕೆ. ಸುಬ್ಬಯ್ಯ,<br>ಮಾಜಿ ಶಾಸಕರು, ನಂ.151, 1ನೇ ಮುಖ್ಯರಸ್ತೆ, ಎಂ.ಎಲ್.ಎ ಲೇಔಟ್,<br>ಆರ್.ಟಿ.ನಗರ, ಬೆಂಗಳೂರು–32. | ಸದಸ್ಯರು |
| 31 | ಶ್ರೀ ಕೆ.ಹೆಚ್. ಶ್ರೀನಿವಾಸ್,<br>ಮಾಜಿ ಶಾಸಕರು, ನಂ.234, ದವಳ, ಸಿ.ವಿ. ರಾಮನ್ ರಸ್ತೆ,<br>ರಾಜಮಹಲ್ ವಿಲಾಸ್ (ಆರ್.ಎಂ.ವಿ), ಸದಾಶಿವನಗರ,<br>ಬೆಂಗಳೂರು. | ಸದಸ್ಯರು |
| 32 | ಶ್ರೀ ಕೋಣಂದೂರು ಲಿಂಗಪ್ಪ,<br>ಮಾಜಿ ಶಾಸಕರು, ಮೇದರ ಕೇರಿ, ವಿನೋಭನಗರ,<br>ಶಿವಮೊಗ್ಗ, | ಸದಸ್ಯರು |
| 33 | ಶ್ರೀ ಬಿ.ಎ. ಮೊಯಿದ್ದೀನ್,<br>ಮಾಜಿ ಸಚಿವರು, ನಂ.ಎ/4, ಶ್ರೀ ರೆಸಿಡೆನ್ಸಿ, 60 ಅಡಿರಸ್ತೆ,<br>ಸಂಜಯ ನಗರ, ಬೆಂಗಳೂರು–94 | ಸದಸ್ಯರು |
| 34 | ಶ್ರೀ ಜಿ.ವಿ. ಶ್ರೀರಾಮ ರೆಡ್ಡಿ,<br>ಮಾಜಿ ಶಾಸಕರು, ಬಾಗೇಪಲ್ಲಿ ಅಂಚೆ,<br>ಚಿಕ್ಕಬಳ್ಳಾಪುರ ಜಿಲ್ಲೆ. | ಸದಸ್ಯರು |
| 35 | ಶ್ರೀ ಸತ್ಯನಾರಾಯಣ್,<br>ನಂ.1 ಬಿ. 6ನೇ ಕ್ರಾಸ್, ಎಲ್.ಐ.ಸಿ. ಕಾಲೋನಿ,<br>(ಜೆ.ಪಿ.ಹೆಚ್) 3ನೇ ಬ್ಲಾಕ್ ಪೂರ್ವ, ಜಯನಗರ,<br>ಬೆಂಗಳೂರು–11 | ಸದಸ್ಯರು |
| 36 | ಶ್ರೀ ಎಸ್. ವಿ. ಜಯಶೀಲ ರಾವ್.<br>ನಂ.431, 5ನೇ ಕ್ರಾಸ್, 7ನೇ ಬ್ಲಾಕ್ ಪಶ್ಚಿಮ, ಜಯನಗರ,<br>ಬೆಂಗಳೂರು–560070. | ಸದಸ್ಯರು |
| 37 | ಶ್ರೀ ಪಿ ರಾಮಯ್ಯ,<br>ನಂ.466, 5ನೇ ಮುಖ್ಯರಸ್ತೆ, ಸದಾಶಿವನಗರ,<br>ಬೆಂಗಳೂರು–80. | ಸದಸ್ಯರು |
| 38 | ಶ್ರೀ ಹೆಚ್.ಡಿ. ಗಂಗರಾಜ್,<br>ಹಳೇ ನಂ. 44, ಹೊಸ ನಂ.51, ಸರ್ಪಟೈನ್ ರಸ್ತೆ, 5ನೇ ಬ್ಲಾಕ್,<br>ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು–20. | ಸದಸ್ಯರು |
| 39 | ಡಾ॥ ಮರಳ ಸಿದ್ದಪ್ಪ,<br>ನಂ.137, 12ನೇ ಕ್ರಾಸ್, ಜೆ.ಪಿ.ನಗರ, 2ನೇ ಹಂತ,<br>ಬೆಂಗಳೂರು–560078. | ಸದಸ್ಯರು |
| 40 | ಶ್ರೀ ಜೆ.ಸಿ. ಲಿನ್, ಐ.ಎ.ಎಸ್.(ನಿ)<br>ನಂ.104, ರಹೆಜಹೇವನ್, 1ನೇ ಮಹಡಿ, ನಂ.12, ಪ್ರೈಮ್‌ರೋಸ್<br>ರಸ್ತೆ, ಬೆಂಗಳೂರು–25. | ಸದಸ್ಯರು |

| ಕ್ರಮ ಸಂಖ್ಯೆ | ಹೆಸರು, ಹುದ್ದೆ ಮತ್ತು ವಿಳಾಸ | |
|---|---|---|
| 41 | ಶ್ರೀ ಚಿರಂಜೀವಿ ಸಿಂಗ್, ಐ.ಎ.ಎಸ್.(ನಿ), ನಂ.1204, 100 ಅಡಿರಸ್ತೆ, ಹೆಚ್.ಎ.ಎಲ್. 3ನೇ ಹಂತ, ಇಂದಿರಾನಗರ, ಬೆಂಗಳೂರು–560038. | ಸದಸ್ಯರು |
| 42 | ಶ್ರೀ ಶೇಷಚಂದ್ರಿಕಾ, ನಂ.18, ಖಾದಿ ಲೇಔಟ್, ಕತ್ರಿಗುಪ್ಪೆ, ಮುಖ್ಯರಸ್ತೆ, ಬನಶಂಕರಿ, 3ನೇ ಹಂತ, ಬೆಂಗಳೂರು–85 | ಸದಸ್ಯರು |
| 43 | ಶ್ರೀ ಮಹದೇವಪ್ರಕಾಶ್, ಸಂಪಾದಕರು, ಭಾನುವಾರ ತಿಂಗಳ ಪತ್ರಿಕೆ, 1ನೇ ಮಹಡಿ, 5ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು–5600104. | ಸದಸ್ಯರು |
| 44 | ಶ್ರೀಮತಿ ಭಾರತಿ ಅರಸು, ಕೇರಾಫ್, ಶ್ರೀ ಎಂ.ಜಿ. ನಾಗರಾಜ ಅರಸ್, ಪಾರಿಜಾತ, ಲಲಿತಮಹಲ್ ರಸ್ತೆ, ಮೈಸೂರು–4 | ಸದಸ್ಯರು |
| 45 | ಶ್ರೀ ಎಸ್.ಕೆ. ದಾಸ್, ಐ.ಎ.ಎಸ್ (ನಿ) ಬಿ–3, ಆನಂದ ಅಪಾರ್ಟ್‌ಮೆಂಟ್, ಆರ್.ಎಂ.ವಿ. ಬಡಾವಣೆ, ಸದಾಶಿವನಗರ ಪೋಲೀಸ್ ಠಾಣೆ ಎದುರು, ಬೆಂಗಳೂರು–80. | ಸದಸ್ಯರು |
| 46 | ಶ್ರೀ ಸೂರಜ್ ಎಂ.ಎನ್. ಹೆಗಡೆ, ಕಾರ್ಯದರ್ಶಿ, ನಂ.236/1, 80 ಅಡಿರಸ್ತೆ, 5ನೇ ಕ್ರಾಸ್, 2ನೇ ಬ್ಲಾಕ್, ಆರ್.ಎಂ.ವಿ. 2ನೇ ಹಂತ, ಬೆಂಗಳೂರು–94. | ಸದಸ್ಯರು |
| 47 | ಶ್ರೀ ಕಮಲೇಶ್, ನಂ.9, ನೃಪತುಂಗ, 15ನೇ ಕ್ರಾಸ್, ಉಲ್ಲಾಳ ಮುಖ್ಯರಸ್ತೆ, ಮುನೇಶ್ವರ ನಗರ, ಬೆಂಗಳೂರು–56. | ಸದಸ್ಯರು |
| 48 | ಶ್ರೀ ಎಸ್. ರಾಮಚಂದ್ರ, ವಕೀಲರು, ನಂ.406, ಎ, 2ನೇ ಕ್ರಾಸ್, 3ನೇ ಬ್ಲಾಕ್, ಕೋರಮಂಗಲ, ಬೆಂಗಳೂರು–34. | ಸದಸ್ಯರು |
| 49 | ಶ್ರೀಮತಿ ವಿಜಯಲಕ್ಷ್ಮಿ ಅರಸ್, ಅಧ್ಯಕ್ಷರು, ಕಂಠೀರವ ಸ್ಟುಡಿಯೋ, ಕಂಠೀರವ ನಗರ, ಮಹಾಲಕ್ಷ್ಮೀ ಲೇಔಟ್, ಬೆಂಗಳೂರು. | ಸದಸ್ಯರು |
| 50 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣ ಇಲಾಖೆ, ಕೊಠಡಿ ಸಂಖ್ಯೆ: 246, ವಿಧಾನ ಸೌಧ, ಬೆಂಗಳೂರು. | ಸದಸ್ಯರು |
| 51 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, 2ನೇ ಮಹಡಿ, ಬೆಂಗಳೂರು. | ಸದಸ್ಯರು |
| 52 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ವಿಕಾಸ ಸೌಧ, ಬೆಂಗಳೂರು. | ಸದಸ್ಯರು |
| 53 | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಡಿ.ದೇವರಾಜ ಅರಸು ಭವನ, ವಸಂತನಗರ, ಬೆಂಗಳೂರು. | ಸದಸ್ಯರು |

| ಕ್ರಮ ಸಂಖ್ಯೆ | ಹೆಸರು, ಹುದ್ದೆ ಮತ್ತು ವಿಳಾಸ | |
|---|---|---|
| 54 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, 2ನೇ ಮಹಡಿ, ವಿಕಾಸಸೌಧ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

2) ಡಿ.ದೇವರಾಜ ಅರಸು, ಮಾಜಿ ಮುಖ್ಯಮಂತ್ರಿಗಳ ಜನ್ಮಶತಮಾನೋತ್ಸವ ಆಚರಣೆಗೆ ಸಂಬಂಧಿಸಿದಂತೆ ಕಾರ್ಯಕಾರಿ ಸಮಿತಿ.

| ಕ್ರಮ ಸಂಖ್ಯೆ | ಹೆಸರು, ಹುದ್ದೆ ಮತ್ತು ವಿಳಾಸ | |
|---|---|---|
| 1 | ಶ್ರೀ ಹೆಚ್.ವಿಶ್ವನಾಥ್, ಮಾಜಿ ಸಂಸದರು ಹಾಗೂ ಮಾಜಿ ಸಚಿವರು, ವಿನಾಯಕ ಬಡಾವಣೆ, 2ನೇ ಅಡ್ಡರಸ್ತೆ, ಕೆ.ಆರ್.ನಗರ, ಮೈಸೂರು ಜಿಲ್ಲೆ. | ಅಧ್ಯಕ್ಷರು |
| 2 | ಅಧ್ಯಕ್ಷರು, ಕರ್ನಾಟಕ ರಾಜ್ಯ ಹಿಂದುಳಿದ ಜಾತಿಗಳ ಒಕ್ಕೂಟ (ರಿ), ಬೆಂಗಳೂರು. | ಸದಸ್ಯರು |
| 3 | ಶ್ರೀ ಹೆಚ್.ಎ. ವೆಂಕಟೇಶ್, ವಕೀಲರು, ಮೈಸೂರು ವಿಶ್ವವಿದ್ಯಾನಿಲಯದ ಮಾಜಿ ಸಿಂಡಿಕೇಟ್ ಸದಸ್ಯರು, 1040, 21ನೇ ಮುಖ್ಯ ರಸ್ತೆ, ಜೆ.ಪಿ. ನಗರ, ಮೈಸೂರು–8 | ಸದಸ್ಯರು |
| 4 | ಶ್ರೀ ಹೆಚ್.ಎಂ. ರೇವಣ್ಣ, ಮಾನ್ಯ ವಿಧಾನ ಪರಿಷತ್ ಸದಸ್ಯರು, ಶ್ರೀ ಸಾಯಿರಂಗ, ನಂ.125, 1ನೇ ಮುಖ್ಯ ರಸ್ತೆ, 2ನೇ ಹಂತ, ಮಹಾಲಕ್ಷ್ಮೀಪುರಂ, ಬೆಂಗಳೂರು–86 | ಸದಸ್ಯರು |
| 5 | ಶ್ರೀ ದಿನೇಶ್ ಅಮೀನ್ ಮಟ್ಟು, ಮಾನ್ಯ ಮುಖ್ಯಮಂತ್ರಿಯವರ ಮಾಧ್ಯಮ ಸಲಹೆಗಾರರು, 2ನೇ ಮಹಡಿ, ವಿಧಾನ ಸೌಧ, ಬೆಂಗಳೂರು | ಸದಸ್ಯರು |
| 6 | ಶ್ರೀ ಎಲ್.ಎನ್. ಮೂರ್ತಿ, ನಂ.775, ಕೆಂಗೇರಿ ಉಪನಗರ, ಬೆಂಗಳೂರು–60. | ಸದಸ್ಯರು |
| 7 | ಶ್ರೀ ಹೆಚ್.ಡಿ. ಬಸವರಾಜು, ಮಾಜಿ ಶಾಸಕರು, 1138, ಇ/ಎ ಪದ್ಮ, 3ಬಿ ಮುಖ್ಯ ರಸ್ತೆ, ವಿಜಯನಗರ 2ನೇ ಹಂತ, ಬೆಂಗಳೂರು. | ಸದಸ್ಯರು |
| 8 | ಶ್ರೀ ಕೆ.ಎಂ. ನಾಗರಾಜ್, 465/10, ಕನಕನಪಾಳ್ಯ ರಸ್ತೆ, ಜಯನಗರ, 2ನೇ ಬ್ಲಾಕ್, ಅಶೋಕ ಪಿಲ್ಲರ್ ಹತ್ತಿರ, ಬೆಂಗಳೂರು–11. | ಸದಸ್ಯರು |
| 9 | ಶ್ರೀ ಎಸ್.ವಿ. ಅಮೀನ್, ಶಾಶ್ವತ ಹಿಂದುಳಿದ ವರ್ಗಗಳ ಆಯೋಗದ ಮಾಜಿ ಸದಸ್ಯರು, ನಂ.1350, 26ನೇ ಕ್ರಾಸ್, 25ನೇ ಮುಖ್ಯ ರಸ್ತೆ, 2ನೇ ಸೆಕ್ಟರ್, ಹೆಚ್.ಎಸ್.ಆರ್. ಬಡಾವಣೆ, ಬೆಂಗಳೂರು. | ಸದಸ್ಯರು |
| 10 | ಡಾ॥ ಇ.ಸಿ. ರಾಮಚಂದ್ರೇಗೌಡ, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. | ಸದಸ್ಯರು |
| 11 | ಶ್ರೀಮತಿ ಗೌರಿ ಲಂಕೇಶ್ ಸಂಪಾದಕರು, ಲಂಕೇಶ್ ಪತ್ರಿಕೆ, ಸುಬ್ಬರಾಮಚೆಟ್ಟಿ ರಸ್ತೆ, ಬಸವನಗುಡಿ, ಬೆಂಗಳೂರು. | ಸದಸ್ಯರು |

| ಕ್ರಮ ಸಂಖ್ಯೆ | ಹೆಸರು, ಹುದ್ದೆ ಮತ್ತು ವಿಳಾಸ | |
|---|---|---|
| 12 | ಶ್ರೀ ಉಮೇಶ್ ಎ.ಎಲ್.<br>ನಿವೃತ್ತ ಜಂಟಿ ನಿರ್ದೇಶಕರು, ನಂ:45, 'ಭಾಗೀರಥಿ' 1ನೇ ಐ ಮುಖ್ಯರಸ್ತೆ, ಸಜ್ಜೆಪಾಳ್ಯ, 2ನೇ ಹಂತ 1ನೇ ಬ್ಲಾಕ್, ನಾಗರಭಾವಿ, ಬೆಂಗಳೂರು–72. | ಸದಸ್ಯರು |
| 13 | ಶ್ರೀ ಕಾ.ತಾ ಚಿಕ್ಕಣ್ಣ,<br>ನಿವೃತ್ತ ಜಂಟಿ ನಿರ್ದೇಶಕರು,<br>208, 2ನೇ ಮಹಡಿ, ಕಿಂಗ್ಸ್ ಅಂಡ್ ಕ್ವೀನ್ ಅಪಾರ್ಟ್‌ಮೆಂಟ್, ಚುಂಚಘಟ್ಟ ಮುಖ್ಯರಸ್ತೆ, ನ್ಯೂ ಬ್ಯಾಂಕ್ ಕಾಲೋನಿ, ಕೋಣನಕುಂಟೆ, ಬೆಂಗಳೂರು–62. | ಸದಸ್ಯರು |
| 14 | ನಿರ್ದೇಶಕರು,<br>ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಬೆಂಗಳೂರು. | ಸದಸ್ಯರು |
| 15 | ನಿರ್ದೇಶಕರು,<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕನ್ನಡ ಭವನ, ಜೆ.ಸಿ.ರಸ್ತೆ. ಬೆಂಗಳೂರು. | ಸದಸ್ಯರು |
| 16 | ಆಯುಕ್ತರು,<br>ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ವಸಂತನಗರ, ಬೆಂಗಳೂರು. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಆರ್. ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**P.R. 421**
**S.C. 200**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿನ ಆಶ್ರಮ ಶಾಲಾ ಶಿಕ್ಷಕರು, ಅಡುಗೆಯವರು, ಅಡುಗೆ ಸಹಾಯಕರು, ಗ್ರೂಪ್–ಡಿ ಮತ್ತು ಕಾವಲುಗಾರರು ವೃಂದದ ಹುದ್ದೆಗಳನ್ನು ಪುರುಷ ಮತ್ತು ಮಹಿಳೆಯವರ ವೃಂದಗಳಾಗಿ ಪ್ರತ್ಯೇಕಗೊಳಿಸಿ ಪುನರ್ ಪದನಾಮಕರಣಗೊಳಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 46 ಎಸ್‌ಆರ್‌ಡಿ 95, ದಿನಾಂಕ:19.09.1997
2) ಸರ್ಕಾರದ ಅಧಿಸೂಚನೆ ಸಂ. ಡಿಪಿಎಆರ್ 47 ಎಸ್‌ಆರ್‌ಡಿ 2002 ದಿನಾಂಕ 3–9–2002
3) ಸರ್ಕಾರದ ಅಧಿಸೂಚನೆ ಸಂ.ಸಕಇ 239 ಬಿಇಟಿ 2007, ದಿನಾಂಕ 18–10–2007.
4) ಸರ್ಕಾರದ ಆದೇಶ ಸಂ.ಹಿಂವಕ 220 ಬಿಇಟಿ 2013 ದಿನಾಂಕ 26–07–2014.
5) ಸರ್ಕಾರದ ಆದೇಶ ಸಂ.ಹಿಂವಕ 306 ಬಿಇಟಿ 2014 ದಿನಾಂಂಕ 18–03–2015.
6) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಅಧ್ಯಕ್ಷ್ಯತೆಯಲ್ಲಿ ದಿನಾಂಕ: 20.11.2014 ರಂದು ನಡೆದ ವೃಂದ ಪರಿಶೀಲನಾ ಉಪ ಸಮಿತಿ ಸಭೆಯ ನಡವಳಿಗಳು
7) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷ್ಯತೆಯಲ್ಲಿ ದಿನಾಂಕ 07–04–2015 ನಡೆದ ವೃಂದ ಪರಿಶೀಲನಾ ಸಮಿತಿ ಸಭೆಯ ನಡವಳಿಗಳು

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲಾಗಿದ್ದು, ಮೇಲೆ(2) ಮತ್ತು (3)ರಲ್ಲಿ ಓದಲಾದ ಅಧಿಸೂಚನೆಗಳಲ್ಲಿ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಕಾಲಕಾಲಕ್ಕೆ ತಿದ್ದುಪಡಿ ಮಾಡಲಾಗಿದೆ. ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ವೇತನ ಶ್ರೇಣಿ 11600–21000 ರಲ್ಲಿ ಕಿರಿಯ ನಿಲಯ ಮೇಲ್ವಿಚಾರಕರು ಎಂಬ ಹೊಸ ವೃಂದದ 307 ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಮತ್ತು ಮೇಲೆ (5) ರಲ್ಲಿ ಓದಲಾದ ಆದೇಶದಲ್ಲಿ ಈ ಹುದ್ದೆಗಳನ್ನು ಕಿರಿಯ ನಿಲಯ ಮೇಲ್ವಿಚಾರಕರು (ಪುರುಷ) ಮತ್ತು ಕಿರಿಯ ನಿಲಯ ಮೇಲ್ವಿಚಾರಕರು (ಮಹಿಳೆ) ಎಂಬುದಾಗಿ ಪುನರ್ ಪದನಾಮಕರಣಗೊಳಿಸಲಾಗಿದೆ.

ಮೇಲೆ(5) ಮತ್ತು (6)ರಲ್ಲಿ ಓದಲಾದ ವೃಂದ ಪರಿಶೀಲನಾ ಉಪ ಸಮಿತಿಯ ಮತ್ತು ವೃಂದ ಪರಿಶೀಲನಾ ಸಮಿತಿಯ ಸಭೆಯ ನಡವಳಿಗಳಲ್ಲಿ, ಇಲಾಖೆಯ ನಿಲಯ ಮೇಲ್ವಿಚಾರಕರು (ಪುರುಷ) ಮತ್ತು ನಿಲಯ ಮೇಲ್ವಿಚಾರಕರು (ಮಹಿಳೆ) ಈ ವೃಂದಗಳಿಗೆ ಇರುವ ನೇಮಕಾತಿ ವಿಧಾನ ಮತ್ತು ಅರ್ಹತೆಗಳನ್ನು ತಿದ್ದುಪಡಿ ಮಾಡುವ ಬಗ್ಗೆ ಮತ್ತು ಹೊಸದಾಗಿ ಸೃಜಿಸಲಾದ ಕಿರಿಯ ನಿಲಯ ಮೇಲ್ವಿಚಾರಕರು (ಪುರುಷ) ಮತ್ತು ಕಿರಿಯ ಮೇಲ್ವಿಚಾರಕರು

(ಮಹಿಳೆ) ವೃಂದಗಳಿಗೆ ನೇಮಕಾತಿ ವಿಧಾನ ಮತ್ತು ಅರ್ಹತೆಗಳನ್ನು ನಿಗದಿಪಡಿಸುವ ಬಗ್ಗೆ ಪರಿಶೀಲಿಸಿ, ಈ ಸಂಬಂಧದಲ್ಲಿ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ತರಲು ತೀರ್ಮಾನಿಸಲಾಗಿದ್ದು, ನಿಲಯ ಮೇಲ್ವಿಚಾರಕರು (ಪುರುಷ) ಮತ್ತು ನಿಲಯ ಮೇಲ್ವಿಚಾರಕರು (ಮಹಿಳೆ) ವೃಂದಗಳಿಗೆ ಕ್ರಮವಾಗಿ ಕಿರಿಯ ನಿಲಯ ಮೇಲ್ವಿಚಾರಕರು (ಪುರುಷ) ಮತ್ತು ಕಿರಿಯ ಮೇಲ್ವಿಚಾರಕರು (ಮಹಿಳೆ) ವೃಂದಗಳಿಂದ ಮತ್ತು ಆಶ್ರಮ ಶಾಲಾ ಶಿಕ್ಷಕರು ವೃಂದದಿಂದ ಮುಂಬಡ್ತಿ ಅವಕಾಶ ಕಲ್ಪಿಸಲು ಸಹ ತೀರ್ಮಾನಿಸಲಾಗಿದೆ. ಹಾಗೂ ಕಿರಿಯ ನಿಲಯ ಮೇಲ್ವಿಚಾರಕರು (ಪುರುಷ) ಮತ್ತು ಕಿರಿಯ ಮೇಲ್ವಿಚಾರಕರು (ಮಹಿಳೆ) ವೃಂದಗಳಿಗೆ ಅಡುಗೆಯವರು, ಅಡುಗೆ ಸಹಾಯಕರು, ಕಾವಲುಗಾರರು ಮತ್ತು ಗ್ರೂಪ್–ಡಿ ವೃಂದದ ನೌಕರ ವೃಂದಗಳಿಂದ ಮುಂಬಡ್ತಿ ನೀಡುವ ಅವಕಾಶವನ್ನು ಕಲ್ಪಿಸಲು ತೀರ್ಮಾನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಆಶ್ರಮ ಶಾಲಾ ಶಿಕ್ಷಕರು, ಅಡುಗೆಯವರು, ಅಡುಗೆ ಸಹಾಯಕರು, ಗ್ರೂಪ್–ಡಿ ಮತ್ತು ಕಾವಲುಗಾರರು ವೃಂದಗಳನ್ನು ಪುರುಷ ಮತ್ತು ಮಹಿಳೆಯರ ವೃಂದಗಳಾಗಿ ಪ್ರತ್ಯೇಕಗೊಳಿಸಿ ಪುನರ್ ಪದನಾಮಕರಣಗೊಳಿಸುವ ಅವಶ್ಯಕತೆ ಇರುವುದರಿಂದ, ಈ ಬಗ್ಗೆ ಕಾರ್ಯಕಾರಿ ಆದೇಶ ಹೊರಡಿಸಲು ಸಹ ಮೇಲೆ (5) ಮತ್ತು (6)ರಲ್ಲಿ ಓದಲಾದ ನಡವಳಿಗಳಲ್ಲಿ ಸೂಚಿಸಲಾಗಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ. ಹಿಂವಕ 306 ಬಿಇಟಿ 2014, ಬೆಂಗಳೂರು, ದಿನಾಂಕ 10–07–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿರುವ ಆಶ್ರಮ ಶಾಲಾ ಶಿಕ್ಷಕರು, ಅಡುಗೆಯವರು, ಅಡುಗೆ ಸಹಾಯಕರು, ಗ್ರೂಪ್–ಡಿ ಮತ್ತು ಕಾವಲುಗಾರರು ವೃಂದಗಳನ್ನು ಪುರುಷ ಮತ್ತು ಮಹಿಳೆಯರ ವೃಂದಗಳಾಗಿ ಪ್ರತ್ಯೇಕಗೊಳಿಸಿ ಪುನರ್ ಪದನಾಮಕರಣಗೊಳಿಸಿದೆ. ಸದರಿ ವೃಂದಗಳಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಪುರುಷ ಮತ್ತು ಮಹಿಳಾ ನೌಕರರ ಜೇಷ್ಠತಾ ಪಟ್ಟಿಗಳನ್ನು ಪ್ರತ್ಯೇಕಗೊಳಿಸಿ ತಯಾರಿಸಿ ಪ್ರಕಟಿಸಲು ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಆರ್. ಎರೆಕುಪ್ಪಿ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**P.R. 426**

## HOME SECRETARIAT

**Sub :** Compensation to the victims of attacks on Churches during 2008.

**Read :**

1. Report of Justice Sri B.K.Somashekar Commission.
2. Report of NHRC Team which visited the State during 2008.
3. Letter of .NHRC Case No.326/10/1/08-09, dated: 07-05-2015.

**PREAMBLE :**

The report submitted by justice Sri B.K.Somashkear Commission [read at (1) above] which was constituted to inquire into the incidents of attacks on Churches during 2008, was placed before by the Cabinet Committee on 16/10/2014, and the Cabinet Committee decided to take action on the recommendations narrated in the report of the NHRC Team which visited the State during 2008 [read at (2) above].

Further National Human Right Commission in letter Vide refer (3) above has recommend to pay monetary relief to 12 persons.

The extract of the letter read at (3) above is detailed below;

It is not in dispute that the religious places of Christians were attacked by fundamentalists. It was natural for the followers of Christianity to feel agitated. It is their fundamental right to protest against the desecration of their religious places. Even if it became necessary for the police to use force to disperse the agitating mob, it should have used such force with utmost restraint. The enquiry report of the NHRC team establishes that the police used excessive force. Therefore, the 12 persons who received injuries in police action are entitled to be compensated. The Commission, therefore, recommends to the Government of Karnataka to pay a sum of Rs.15,000/- each as monetary relief to the following 12 persons:

| | | | |
|---|---|---|---|
| 1) | Ashma Dorothy Montero | 7) | Sister Greta Gomes |
| 2) | Francis | 8) | Rison Fernando |
| 3) | Renil D'Souza | 9) | Francis D'Silva |
| 4) | Senior Sister Denisia | 10) | Savitha Shanti Pinto |
| 5) | Senior Sister Selma | 11) | Alice Rodrigues |
| 6) | Sister Preeti Fernando | 12) | Ms. Nishal D'Souza. |

Hence this order.

**GOVERNMENT ORDER NO. HD 426 SST 2009 (P2) BENGALURU. DATE 23/06/2015**

The Government is pleased to sanction compensation of Rs.15,000/- (Rupees Fifteen thousand only) EACH, to the victims of Churches attacks at St.Josephs School, Kulsekhar, Dakshina Kannada District in 2008. The details are as below:

| | | |
|---|---|---|
| 1) Ashma Dorothy Montero | 7) Sister Greta Gomes | Rs.15,000/- EACH |
| 2) Francis | 8) Rison Fernando | |
| 3) Renil D'Souza | 9) Francis D'Silva | |
| 4) Senior Sister Denisia | 10) Savitha Shanti Pinto | |
| 5) Senior Sister Selma | 11) Alice Rodrigues | |
| 6) Sister Preeti Fernando | 12) Ms. Nishal D'Souza. | |

The Deputy Commissioner, Dakshina Kannada is authorized to release the compensation to the victims under the Head of Account 2235-60-200-3-01-100 non-plan.

This order issues with the Financial powers delegated to the Heads of Department vide No. FD 3, TFP 2011, dated; 27/10//2012.

By Order and in the name of the Governor of Karnataka

**C.N. MEENA NAGARAJ**

Deputy Secretary to Government,

Home Department (Law & Order)

**P.R. 416**

**S.C. 25**

## ಕೃಷಿ ಸಚಿವಾಲಯ

**ವಿಷಯ :** ಸರ್ಕಾರದ ಕಾರ್ಯದರ್ಶಿ, ಆಹಾರ ಸಂಸ್ಕರಣೆ ಹಾಗೂ ಕಟಾವು ತಂತ್ರಜ್ಞಾನ ಇವರಿಗೆ ಕಾರ್ಯ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಅಧಿಸೂಚನೆ ಸಂಖ್ಯೆ: ಸಿಆಸುಇ 304 ಸೇಅಸೆ 2015, ದಿನಾಂಕ: 29-04-2015
2) ಪತ್ರ ಸಂಖ್ಯೆ : ಕೃಇ 02 ಅಸಂಕತಂ 2015, ದಿನಾಂಕ 16-05-2015

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯ ಪ್ರಕಾರ ಶ್ರೀಮತಿ ರಶ್ಮಿ ವಿ. ಮಹೇಶ್, ಭಾ.ಅ.ಸೇ. ಇವರನ್ನು ಸರ್ಕಾರದ ಕಾರ್ಯದರ್ಶಿ, ಆಹಾರ ಸಂಸ್ಕರಣೆ ಹಾಗೂ ಕಟಾವು ತಂತ್ರಜ್ಞಾನ ಹುದ್ದೆಗೆ ನೇಮಿಸಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ, ಸರ್ಕಾರದ ಕಾರ್ಯದರ್ಶಿ, ಆಹಾರ ಸಂಸ್ಕರಣೆ ಹಾಗೂ ಕಟಾವು ತಂತ್ರಜ್ಞಾನ ಇವರು ಆ ಹುದ್ದೆಯಲ್ಲಿ ನಿರ್ವಹಿಸಬೇಕಾಗಿರುವ ಕರ್ತವ್ಯ ಮತ್ತು ವಿಷಯಗಳ ಬಗ್ಗೆ ಮಾಹಿತಿಯನ್ನು ತಿಳಿಸುವಂತೆ ಕೋರಿರುತ್ತಾರೆ.

3. ಕೃಷಿ ಇಲಾಖೆಯಲ್ಲಿ ನಿರ್ವಹಿಸಲಾಗುತ್ತಿರುವ ಕೆಲವು ವಿಷಯಗಳನ್ನು ಸರ್ಕಾರದ ಕಾರ್ಯದರ್ಶಿ, ಆಹಾರ ಸಂಸ್ಕರಣೆ ಹಾಗೂ ಕಟಾವು ತಂತ್ರಜ್ಞಾನ ಇವರ ಆಡಳಿತ ವ್ಯಾಪ್ತಿಗೆ ಒಳಪಡಿಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕೃಇ 54 ಕೃಸ್ವೀರ 2015, ಬೆಂಗಳೂರು, ದಿನಾಂಕ 12-06-2015.**

4. ಸರ್ಕಾರದ ಕಾರ್ಯದರ್ಶಿ, ಆಹಾರ ಸಂಸ್ಕರಣೆ ಹಾಗೂ ಕಟಾವು ತಂತ್ರಜ್ಞಾನ ಇವರಿಗೆ ಈ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಕೆಳಕಂಡ ವಿಷಯಗಳನ್ನು ಅವರ ಆಡಳಿತ ವ್ಯಾಪ್ತಿಗೆ ಒಳಪಡಿಸಿ ಹಂಚಿಕೆ ಮಾಡಲಾಗಿದೆ :

1) ಆಹಾರ ಸಂಸ್ಕರಣೆಗೆ ಸಂಬಂಧಿಸಿದ ಸಮಸ್ತ ವಿಷಯಗಳು (Matters pertaining to Food processing)
2) ಕರ್ನಾಟಕ ಆಗ್ರೋ ಕಾರ್ನ್ ನಿಗಮಕ್ಕೆ ಸಂಬಂಧಿಸಿದ ಸಮಸ್ತ ವಿಷಯಗಳು (Matters pertaining to the Karnataka Agro-Corn Corporation)
3) ಆಹಾರ ಧಾನ್ಯಗಳು/ಕೃಷಿ ಉತ್ಪನ್ನಗಳ ಸಂಗ್ರಹಣೆ ಮತ್ತು ಕಟಾವು ನಂತರದ ತಂತ್ರಜ್ಞಾನ (Storage of Food grains/Agriculture produce and post harvest technology)
4) ಕರ್ನಾಟಕ ಕೃಷಿ ಉತ್ಪನ್ನಗಳ ಸಂಸ್ಕರಣೆ ಮತ್ತು ರಫ್ತು ನಿಗಮ (KPPEC) ಹಾಗೂ ಕರ್ನಾಟಕ ಆಹಾರ ನಿಗಮ ನಿಯಮಿತ (FKL) ಗೆ ಸಂಬಂಧಿಸಿದ ಸಮಸ್ತ ವಿಷಯಗಳು (Matters pertaining to KAPPEC & FKL)

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



5) ಕರ್ನಾಟಕ ಕೃಷಿ ವಾಣಿಜ್ಯ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್‌ಗೆ ಸಂಬಂಧಿಸಿದ ಸಮಸ್ತ ವಿಷಯಗಳು (Matters pertaining to KABDC & KAIC)

5. ಈ ವಿಷಯಗಳಲ್ಲಿ ನೀತಿ ನಿರೂಪಣೆಗೆ (policy matters) ಸಂಬಂಧಿಸಿದ ಪ್ರಸ್ತಾವನೆ/ಕಡತಗಳಲ್ಲಿ ಮಾತ್ರ ಸರ್ಕಾರದ ಕಾರ್ಯದರ್ಶಿ, ಕೃಷಿ ಇಲಾಖೆ ಇವರೊಂದಿಗೂ ಸಹ ಸಮಾಲೋಚಿಸುವುದು.

6. ಕೃಷಿ ಇಲಾಖೆಯ ಅಡಿಯಲ್ಲಿ ಬರುವವರನ್ನು ಹೊರತುಪಡಿಸಿ ಮೇಲೆ ತಿಳಿಸಲಾಗಿರುವ ವಿಷಯಗಳಿಗೆ ಸಂಬಂಧಿಸಿದಂತೆ ಸರ್ಕಾರದ ಕಾರ್ಯದರ್ಶಿ, ಆಹಾರ ಸಂಸ್ಕರಣೆ ಹಾಗೂ ಕಟಾವು ತಂತ್ರಜ್ಞಾನ ಇವರ ಕಾರ್ಯವ್ಯಾಪ್ತಿಯಲ್ಲಿ ಬರುವ ಅಧಿಕಾರಿಗಳು ಮತ್ತು ಸಿಬ್ಬಂದಿಯ ನೇಮಕಗಳು, ಸ್ಥಳ ನಿಯುಕ್ತಿ ವರ್ಗಾವಣೆಗಳು, ರಜೆ ಮೊದಲಾದವುಗಳನ್ನು ಸಹ ನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಆರ್. ಬಸವರಾಜಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–1

ಕೃಷಿ ಇಲಾಖೆ

(ಸೇವೆಗಳು ಹಾಗೂ ಸಮನ್ವಯ)

**P.R. 384**
**S.C. 25**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59